ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ಮೋಡ ಬಿತ್ತನೆಯ ಬಗ್ಗೆ

ಶ್ರೀ ಎನ್.ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

1111 (1417) ಮಾನ್ಯ ಕೃಷಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ವ್ಯಾಪಕ ಮಳೆ ಸುರಿದು, 110 ತಾಲ್ಲೂಕುಗಳಲ್ಲಿ ಪ್ರವಾಹ ಬಂದರೂ ಸಹ ಆಪರೇಷನ್ ವರ್ಷಾಧಾರೆ ಹೆಸರಿನಲ್ಲಿ ಮೋಡ ಬಿತ್ತನೆಗೆ ಸರ್ಕಾರ ಚಾಲನೆ ನೀಡಿದೆಯೇ ;

(ಆ) ಹಾಗಿದ್ದಲ್ಲಿ, ಈ ಯೋಜನೆಗೆ 2019-20ರಲ್ಲಿ ಎಷ್ಟು ಹಣವನ್ನು ನಿಗಧಿ ಮಾಡಲಾಗಿತ್ತು ಮತ್ತು ಯಾವ ಸಂಸ್ಥೆಗೆ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿಗಧಿ ಮಾಡಲಾಗಿತ್ತು; (ಸಂಪೂರ್ಣ ಮಾಹಿತಿ ನೀಡುವುದು)

(ಇ) 2019-20 ಮತ್ತು 2020-21 ವರ್ಷಕ್ಕೆ ಮುಂದಿನ ವರ್ಷದ ಮುಂಗಾರು ಹಿಂಗಾರು ಮಳೆ ಬರುವುದಕ್ಕೆ ಮುಂಚಿತವಾಗಿ 2020-21ಕ್ಕೂ ಸಹ ಮೋಡ ಬಿತ್ತನೆಗೆ ಟೆಂಡರ್ ಕರೆಯಲಾಗಿದೆಯೇ ; ಈ ಟೆಂಡರ್‌ನಲ್ಲಿ ಎಷ್ಟು ಕಂಪನಿಗಳು/ ಸಂಸ್ಥೆಗಳು ಭಾಗಿಯಾಗಿದ್ದವು ; (ವಿವರ ನೀಡುವುದು)

(ಈ) ಅಂತಿಮ ಟೆಂಡರ್ ಅನ್ನು ಯಾವ ಕಂಪನಿಯು ಪಡೆದುಕೊಂಡಿತ್ತು, ಆ ಸಂಸ್ಥೆಯ/ಕಂಪನಿಯ ಹೆಸರೇನು ; ಈ ಕಂಪನಿ ಯಾರಿಗೆ ಸೇರಿದ್ದು, ಸಂಪೂರ್ಣ ಮಾಹಿತಿ ನೀಡುವುದು ;

(ಉ) ಈ ಹಿಂದೆ ಮೋಡ ಬಿತ್ತನೆ ಮಾಡಿದ್ದು, ಈ ಬಿತ್ತನೆಯ ಯೋಜನೆ ಫಲ ನೀಡಿರುವ ಬಗ್ಗೆ ವೈಜ್ಞಾನಿಕ ವರದಿ ಇಲ್ಲದಿದ್ದರೂ ಸಹ ಈ ದುಂದು ವೆಚ್ಚದ ಯೋಜನೆಯನ್ನು ಸರ್ಕಾರ ಯಾರ ಹಿತಕ್ಕಾಗಿ ಕೈಗೊಂಡಿತ್ತು ಎಂಬುದರ ಬಗ್ಗೆ ಪೂರ್ಣ ದಾಖಲೆಗಳೊಂದಿಗೆ ಮಾಹಿತಿ ನೀಡುವುದು ?